ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 981

ಉತ್ತರಿಸಬೇಕಾದ ದಿನಾಂಕ : 13.03.2020

ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮೀಣ ಕ್ರೀಡೆಗಳ ಉಳಿವು ಮತ್ತು ಬೆಳವಣಿಗೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಗ್ರಾಮೀಣ ಕ್ರೀಡೆಗಳ ಉಳಿವು ಮತ್ತು ಬೆಳವಣಿಗೆಗೆ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ಗ್ರಾಮೀಣ ಕ್ರೀಡೋತ್ಸವ ಕಾರ್ಯಕ್ರಮವನ್ನು ಹೋಬಳಿ ಮಟ್ಟದಲ್ಲಿ ಆಯೋಜಿಸಲು ಮತ್ತು ಗ್ರಾಮೀಣ ಕುಸ್ತಿ ಪಟುಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಗ್ರಾಮೀಣ ಗರಡಿ ಮನೆ ನಿರ್ಮಾಣ/ದುರಸ್ತಿ ಮಾಡಲು ಯೋಜನೆ ಹಮ್ಮಿಕೊಂಡಿದೆ. |
| ಆ | ಗ್ರಾಮೀಣ ಕ್ರೀಡೆಯೆಂದು ಸರ್ಕಾರ ಯಾವ ಯಾವ ಕ್ರೀಡೆಗಳನ್ನು ಗುರುತಿಸಿದೆ; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಅಧೀನದಲ್ಲಿ ಸಾಮೂಹಿಕ ರಸ್ತೆ ಓಟ, ಕೆಸರು ಗದ್ದೆ ಓಟ, ಟಗ್ ಆಫ್ ವಾರ್, ಮ್ಯೂಸಿಕಲ್ ಚೇರ್, ರಂಗೋಲಿ, ಗುಂಡು ಎತ್ತುವುದು, ಲಗೋರಿ, ಚಿನ್ನಿದಾಂಡು, ಮೂಟೆಹೊರೆ ರೇಸ್, ದೊಣ್ಣೆ ವರಸೆ, ಮಜ್ಜಿಗೆ ಮಡಿಕೆ ಒಡೆಯುವುದು, ಪಗಡೆ, ಅರಳು ಮನೆ ಆಟ, ಕುಂಟು ಮುಟ್ಟಾಟ, ಗೋಣಿ ಚೀಲ ಓಟ, ಮೂರು ಕಾಲು ಓಟ, ಸ್ಲೋ ಸೈಕಲ್ ರೇಸ್, ನಾಡದೋಣಿ/ತೆಪ್ಪ ರೇಸ್, ಕಂಬಳ, ಮಲ್ಲಕಂಬ, ಕುಂಟೋ ಬಿಲ್ಲೆ, ಗಾಳಿಪಟ ರೇಸ್, ನೀರು ಹೊರುವ ಸ್ಪರ್ಧೆ, ಬೀಚ್ ರೇಸ್, ಬ್ಯಾಕ್ ವರ್ಡ್ ರೇಸ್, ಸಂಗ್ರಾಣಿ ಕಲ್ಲು ಎತ್ತುವ ಸ್ಪರ್ಧೆ, ಕುಸ್ತಿ ಸ್ಪರ್ಧೆ, ಕಬಡ್ಡಿ ಸ್ಪರ್ಧೆ, ವಾಲಿಬಾಲ್ ಸ್ಪರ್ಧೆ, ಖೋ-ಖೋ ಸ್ಪರ್ಧೆ ಮತ್ತು ಬಾರುಕೋಲು ರಹಿತ ಎತ್ತಿನಗಾಡಿ ಸ್ಪರ್ಧೆಗಳನ್ನು ಗ್ರಾಮೀಣ ಕ್ರೀಡೆಗಳೆಂದು ಸರ್ಕಾರ ಗುರುತಿಸಿರುತ್ತದೆ. |

--2

| | | |
|---|---|---|
| ಇ | ರಾಜ್ಯ ಮಟ್ಟದ ಗ್ರಾಮೀಣ ಕ್ರೀಡಾ ಕೂಟ ಸಂಘಟಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ರಾಜ್ಯ ಮಟ್ಟದ ಗ್ರಾಮೀಣ ಕ್ರೀಡಾಕೂಟವನ್ನು ಸಂಘಟಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಈ | ಇಂದಿನ ದಿನಗಳಲ್ಲಿ ಹಲವಾರು ಗ್ರಾಮೀಣ ಕ್ರೀಡೆಗಳು, ಜಾನಪದ ಕ್ರೀಡೆಗಳು ನಶಿಸಿ ಹೋಗುತ್ತಿದ್ದು ಅಂತಹ ಕ್ರೀಡೆಗಳನ್ನು ಗುರುತಿಸಿ ದಾಖಲಿಸುವ ಕಾರ್ಯವನ್ನು ಸರ್ಕಾರ ಮಾಡುತ್ತಿದೆಯೇ; ಇದುವರೆಗೆ ಎಷ್ಟು ಕ್ರೀಡಾ ಪ್ರಕಾರಗಳನ್ನು ದಾಖಲಿಸುವ ಕಾರ್ಯವಾಗಿದೆ? | ಇಲ್ಲ |

**ವೈಎಸ್ ಡಿ-/ಇಬಿಬಿ/35/2020**

**(ಸಿ. ಟಿ. ರವಿ)**
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.